# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1375
ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ
ಉತ್ತರಿಸುವ ದಿನಾಂಕ : **09.03.2022.**
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎಷ್ಟು ಹೆಕ್ಟೇರ್ ಸರ್ಕಾರಿ ಬೀಳು ಜಮೀನು ಇದೆ; (ವಿವರ ನೀಡುವುದು) | ರಾಜ್ಯದಲ್ಲಿ 108090.18 ಎಕರೆ ಕಂದಾಯ ಬೀಳು ಜಮೀನುಗಳಿವೆ. ಜಿಲ್ಲಾವಾರು ವಿವರಗಳನ್ನು **ಅನುಬಂಧ**ದಲ್ಲಿ ನೀಡಲಾಗಿದೆ. |
| ಆ) | ಸದರಿ ಸರ್ಕಾರಿ ಬೀಳು ಜಮೀನು R.T.C ಯಲ್ಲಿ ನಮೂದಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಬಂದಿದ್ದಲ್ಲಿ, ಈ ಜಮೀನನ್ನು ಅನುಭವದಾರರು/ಮಾಲೀಕರ ಹೆಸರಿಗೆ R.T.C ತಿದ್ದುಪಡಿ ಮಾಡಲು ಸರ್ಕಾರಕ್ಕೆ ಇರುವ ಅಡೆತಡೆಗಳೇನು; (ವಿವರ ನೀಡುವುದು) | ಕರ್ನಾಟಕ ಭೂ ಕಂದಾಯ ನಿಯಮಗಳು, 1966 ನಿಯಮ 119ರಲ್ಲಿ ಸರ್ಕಾರದ ಪರವಾಗಿ ಖರೀದಿ ಮಾಡಲಾದ ಮತ್ತು ಮುಟ್ಟುಗೋಲುಹಾಕಲಾದ ದಿನಾಂಕದಿಂದ ಮೂರು ವರ್ಷದೊಳಗೆ ಬೇರೆ ರೀತಿಯಲ್ಲಿ ವಿಲೇ ಮಾಡಿರದ ಯಾವುದೇ ಮುಟ್ಟುಗೋಲುಹಾಕದ ಅಧಿಭೋಗದ ಹಕ್ಕನ್ನು ಅಥವಾ ಪರಭಾರೆಯಾದ ಹಿಡುವಳಿಯನ್ನು ಯಾವ ಬಾಕಿಯ ಸಲುವಾಗಿ ಮುಟ್ಟುಗೋಲು ಹಾಕಲಾಗಿತ್ತೋ ಆ ಬಾಕಿಯನ್ನು ಮುಟ್ಟುಗೋಲು ಹಾಕಿದ ದಿನಾಂಕದಿಂದ ಸ್ವಾಧೀನಪಡಿಸುವ ದಿನಾಂಕದವರೆಗಿನ ಹಿಡುವಳಿಯ ಬಗೆಗಿನ ಭೂ ಕಂದಾಯದ ಮೊಬಲಗನ್ನು ಮತ್ತು ಜಿಲ್ಲಾಧಿಕಾರಿಯು ನಡೆಸಬೇಕಾಗಿ ಬಂದ ವಸೂಲಿಯ ಬಗ್ಗೆ ಮತ್ತು ಮುಂದಿನ ವ್ಯವಹರಣೆಗಳ ಸಂಬಂಧದಲ್ಲಿ ಅಲ್ಲಿಯವರೆಗೆ ತಗುಲಿದ ವೆಚ್ಚಗಳನ್ನು ಸಂದಾಯ ಮಾಡಿದ ಮೇಲೆ ಜಿಲ್ಲಾಧಿಕಾರಿಯು ಅಂತಹ ಮುಟ್ಟಗೋಲನ್ನು ಪುನರ್ ಸ್ಥಾಪಿಸಲು ದಿನಾಂಕ:06.09.2014ರವರೆಗೆ ಅವಕಾಶ ಕಲ್ಪಿಸಲಾಗಿತ್ತು.<br><br>ಸದರಿ ಅವಧಿಯಲ್ಲಿ ಸ್ವೀಕರಿಸಿದ ಅರ್ಜಿಗಳನ್ನು ಪುನರ್ ಸ್ಥಾಪಿಸಲು ಆದೇಶ ಹೊರಡಿಸಿದ್ದಲ್ಲಿ, ಅನುಭವದಾರರು/ಮಾಲೀಕರ ಹೆಸರಿಗೆ R.T.C ತಿದ್ದುಪಡಿ ಮಾಡಲು ಕ್ರಮವಹಿಸಲಾಗುತ್ತಿದೆ. |
| ಈ) | R.T.C ಯಲ್ಲಿ ಸರ್ಕಾರಿ ಬೀಳು ಎಂದು ನಮೂದಾಗಿರುವುದರಿಂದ ಸರ್ಕಾರಕ್ಕೆ ರಾಜಸ್ವಕ್ಕೆ ನಷ್ಟವಾಗುತ್ತಿರುವ ಮೊತ್ತ ಎಷ್ಟು; (ವಿವರ ನೀಡುವುದು) | ರೈತರು ಬಾಕಿ ಇರುವ ಮೊಬಲಗನ್ನು ಸರ್ಕಾರಕ್ಕೆ ಸಂದಾಯ ಮಾಡಿದ ಮೇಲೆ ಪುನ: ಸದರಿ ಜಮೀನಿನ ಅಧಿಬೋಗದ ಹಕ್ಕನ್ನು ಅವರಿಗೆ ಪುನರ್ ಸ್ಥಾಪಿಸಲು ಅರ್ಜಿಸಲ್ಲಿಸಲು ಕಾಲಾವಕಾಶ ವಿಸ್ತರಿಸಿದ ನಂತರ |

| | | |
|---|---|---|
| | | ಸರ್ಕಾರಕ್ಕೆ ಬಾಕಿ ಇರುವ ಪೂರ್ಣ ಭೂ ಕಂದಾಯವನ್ನು ಮತ್ತು ಭೂ ಕಂದಾಯ ವಸೂಲಿಯ ವ್ಯವಹಾರಗಳಿಗೆ ಅಲ್ಲಿಯವರೆಗೆ ತಗಲುವ ಎಲ್ಲಾ ವೆಚ್ಚಗಳನ್ನು ಸಂದಾಯ ಮಾಡಬೇಕಾಗಿರುತ್ತದೆ. ಆದುದರಿಂದ ಕಂದಾಯ ರಾಜಸ್ವಕ್ಕೆ ನಷ್ಟ ಉಂಟಾಗುವುದಿಲ್ಲ. |
| **ಉ)** | ಈ ಬಗ್ಗೆ ಅನುಭವದಾರರು/ ಮಾಲೀಕರ ಹೆಸರಿಗೆ R.T.C ತಿದ್ದುಪಡಿ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಕರ್ನಾಟಕ ಭೂ ಕಂದಾಯ ನಿಯಮಗಳು,1966 ರ ನಿಯಮ 119ಗೆ ತಿದ್ದುಪಡಿ ತಂದು ಮುಟ್ಟುಗೋಲನ್ನು ಪುನರ್ ಸ್ಥಾಪಿಸಲು ದಿನಾಂಕ:06.09.2014ರವರೆಗೆ ಅವಕಾಶ ಕಲ್ಪಿಸಲಾಗಿತ್ತು.<br><br>ಸದರಿ ಅವಧಿಯಲ್ಲಿ ಸ್ವೀಕರಿಸಿದ ಅರ್ಜಿಗಳನ್ನು ಪುನರ್ ಸ್ಥಾಪಿಸಲು ಆದೇಶ ಹೊರಡಿಸಿದ್ದಲ್ಲಿ, ಅನುಭವದಾರರು/ಮಾಲೀಕರ ಹೆಸರಿಗೆ R.T.C ತಿದ್ದುಪಡಿ ಮಾಡಲು ಕ್ರಮವಹಿಸಲಾಗುತ್ತಿದೆ.<br><br>ಸದರಿ ಅವಧಿಯು ಮುಕ್ತಾಯವಾದ ಹಿನ್ನೆಲೆಯಲ್ಲಿ ಮತ್ತೊಮ್ಮೆ ಕಾಲಾವಕಾಶ ವಿಸ್ತರಿಸುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

ಸಂಖ್ಯೆ: ಆರ್‌ಡಿ 72 ಎಲ್‌ಜಿಕ್ಯೂ 2022 (ಇ)

(ಆರ್. ಅಶೋಕ)
ಕಂದಾಯ ಸಚಿವರು

## ಅನುಬಂಧ

| ಕ್ರ. ಸಂ. | ಜಿಲ್ಲೆ | ವಿಸ್ತೀರ್ಣ ಎಕರೆ/ ಗುಂಟೆ |
|---|---|---|
| 1 | ಬೆಂಗಳೂರು ನಗರ | 1560-36 |
| 2 | ಬೆಂಗಳೂರು ಗ್ರಾಮಾಂತರ | 756-08 |
| 3 | ಕೋಲಾರ | 954-01 |
| 4 | ಚಿಕ್ಕಬಳ್ಳಾಪುರ | 13385-20 |
| 5 | ರಾಮನಗರ | 1457-28 |
| 6 | ಶಿವಮೊಗ್ಗ | 22010-19 |
| 7 | ಚಾಮರಾಜನಗರ | 891-22 |
| 8 | ಉಡುಪಿ | 0 |
| 9 | ಹಾಸನ | 577-36 |
| 10 | ಉತ್ತರ ಕನ್ನಡ | 7-30. |
| 11 | ಮಂಡ್ಯ | 495-11 |
| 12 | ದಕ್ಷಿಣ ಕನ್ನಡ | 0 |
| 13 | ಮೈಸೂರು | 1409-14 |
| 14 | ಚಿಕ್ಕಮಗಳೂರು | 2408-00 |
| 15 | ಕೊಡಗು | 0 |
| 16 | ಬೆಳಗಾವಿ | 0 |
| 17 | ಬಾಗಲಕೋಟೆ | 0 |
| 18 | ವಿಜಯಪುರ | 0 |
| 19 | ಚಿತ್ರದುರ್ಗ | 0 |
| 20 | ದಾವಣಗೆರೆ | 17588-33 |
| 21 | ತುಮಕೂರು | 3017-00 |
| 22 | ಗದಗ | 0 |
| 23 | ಧಾರವಾಡ | 0 |
| 24 | ಹಾವೇರಿ | 0 |
| 25 | ರಾಯಚೂರು | 0 |
| 26 | ಕೊಪ್ಪಳ | 0 |
| 27 | ಬೀದರ್ | 0 |
| 28 | ಕಲಬುರಗಿ | 0 |
| 29 | ಯಾದಗಿರಿ | 0 |
| 30 | ಬಳ್ಳಾರಿ | 41570-00 |
| 31 | ವಿಜಯನಗರ | 0 |
| | ಒಟ್ಟು: | **108090-18** |